ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ರಾಜ್ಯದಲ್ಲಿ ಅಂತರ್ಜಾಲದ ಅಪರಾಧಗಳು (CYBER CRIME) ಹೆಚ್ಚುತ್ತಿರುವ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) –

536 (549) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿ ಅಂತರ್ಜಾಲದ ಮುಖಾಂತರ ಅಪರಾಧ ಪ್ರಕರಣಗಳು (Cyber Crime) ಹೆಚ್ಚಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು;

(ಆ) ಕಳೆದ 5 ವರ್ಷಗಳಲ್ಲಿ ಅಂತರ್ಜಾಲದ ಮುಖಾಂತರ ದಾಖಲಾಗಿರುವ ಅಪರಾಧ (Cyber Crime) ಪ್ರಕರಣಗಳೆಷ್ಟು; ಎಷ್ಟು ಪ್ರಕರಣಗಳೆಷ್ಟು; ಎಷ್ಟು ಪ್ರಕರಣಗಳಿಗೆ ನ್ಯಾಯ ಒದಗಿಸಲಾಗಿದೆ; (ವಿವರ ನೀಡುವುದು)

(ಇ) ಆಧುನಿಕ ಮಟ್ಟದ ತಾಂತ್ರಿಕತೆಯ ಮೂಲಕ ಈ ಅಪರಾಧಗಳ (Cyber Crime) ಸ್ವರೂಪ ಬದಲಾಗುತ್ತಿರುವ ಪ್ರಕರಣಗಳನ್ನು ಪತ್ತೆಹಚ್ಚಲು ಮತ್ತು ತಡೆಗಟ್ಟಲು ಸರ್ಕಾರ ತೆಗೆದುಕೊಂಡ ಕ್ರಮವೇನು; (ವಿವರ ನೀಡುವುದು)

(ಈ) ದೂರವಾಣಿ ಕರೆ ಅಥವಾ ಸಂದೇಶಗಳ ಮುಖಾಂತರ ಹಲವು ಅಮಾಯಕ ಸಾರ್ವಜನಿಕರ ಹಣವನ್ನು ಅಂತರರಾಜ್ಯ ಮತ್ತು ವಿದೇಶಿಕಳ್ಳರು ಲಪಟಾಯಿಸಿರುವ ಬಗ್ಗೆ ದಾಖಲಾದ ಪ್ರಕರಣಗಳೆಷ್ಟು; (ವಿವರ ನೀಡುವುದು)

(ಉ) ಇಂತಹ ಪ್ರಕರಣಗಳನ್ನು ತಡೆಯಲು ಸರ್ಕಾರದ ಕ್ರಮಗಳೇನು? (ವಿವರ ನೀಡುವುದು)